

ಅಂಕುರ

# ಈ ಕಾಲದ ಒಲವು

ನೂರು ಹಾಯ್ಕುಗಳು



ಜೀವನ ಪ್ರೀತಿ

**ಜೀವನ ಪ್ರೀತಿ ಮಾಲಿಕೆ – ೭**

**ಈ ಕಾಲದ ಒಲವು – ಅಂಕುರ**
**E Kalada Oalavu - Ankura**

**ಲೇಖಕ:** **ಡಾ. ರವಿಶಂಕರ್ ಎ. ಕೆ (ಅಂಕುರ)**
ಸಹಾಯಕ ಪ್ರಾಧ್ಯಾಪಕ
ಕ್ರಿಸ್ತು ಜಯಂತಿ ಕಾಲೇಜು ಸ್ವಾಯತ್ತ
ಕೆ. ನಾರಾಯಣಪುರ, ಬೆಂಗಳೂರು
**ವಿಳಾಸ:** ಅಳಿಲುಘಟ್ಟ, ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ, ಕರ್ನಾಟಕ ೫೭೨೨೨೨

**Writer:** **Dr. Ravishankar A K (Ankura)**
Assistant Professor
Kristu Jayanti College Autonomous
K. Narayanapura, Bengaluru
Address: Alilughatta, Gubbi Taluk, Tumkuru Dist 572222

ಪ್ರಕಾಶನ : ಜೀವನ ಪ್ರೀತಿ, ಬೆಂಗಳೂರು
ಐ. ಎಸ್. ಬಿ. ಎನ್ : ೯೭೮-೯೩-೩೪೦-೯೫೭೦-೮
ಪ್ರಥಮ ಮುದ್ರಣ : ೨೦೨೪
ಪುಟಗಳು : iii + 34

ಬೆಲೆ : ಉಚಿತ
ಮುಖಪುಟ ವಿನ್ಯಾಸ ಹಾಗೂ ಅಕ್ಷರ ಜೋಡಣೆ : ಡಾ. ರವಿಶಂಕರ್ ಎ.ಕೆ
ಕೃತಿ ಕುರಿತು ನಿಮ್ಮ ಚಿಂತನೆ, ಅಭಿಪ್ರಾಯಗಳನ್ನು ಇ ಅಂಚೆಯ ಮೂಲಕ ತಲುಪಿಸಿ.
jeevanaprithi@gmail.com

**ಒಲವಿರುವ**
**ಈ ನಿಸ್ವಾರ್ಥ ಬದುಕೇ**
**ಜೀವಂತ ಕಾವ್ಯ**

ಮನಸ್ಸಿಗೆ ಒಲವಿನ ಚಿಕಿತ್ಸೆ ನೀಡಲು ಈ ಕೃತಿಯು ನಿಮ್ಮ ಮುಂದಿದೆ. ನೋವುಗಳು ಎಲ್ಲರಿಗೂ ವಿಭಿನ್ನವಾದ ಅನುಭವಗಳಾಗಿರುತ್ತವೆ. ಆ ಅನುಭವಗಳನ್ನು ಹದಗೊಳಿಸಿ, ಸಾಂತ್ವನಗೊಳ್ಳಲು ನಮ್ಮೊಳಗಿನ ಹಿತವಾದ ನಂಬಿಕೆಗೆ ಒಲವು ತುಂಬಬೇಕು.

ವಿಶ್ವಸಾಹಿತ್ಯದಲ್ಲಿ ಹಾಯ್ಕುಗಳು ಪ್ರೇಮ ಬರಹಗಳಿಗಾಗಿಯೇ ಸೃಷ್ಟಿಯಾದ ಪ್ರಕಾರದಂತೆ ಕಾಣುತ್ತದೆ. ಕನ್ನಡದಲ್ಲಿಯೂ ಸಾವಿರಾರು ಹಾಯ್ಕುಗಳು ಸೃಷ್ಟಿಯಾಗಿವೆ. **ಈ ಕಾಲದ ಒಲವು** ಇದೇ ಸಾಲಿಗೆ ಸೇರುತ್ತಿದ್ದರೂ ನಿಮ್ಮ ಓದುವಿನ ಸಹೃದಯಕ್ಕೆ ವಿಶೇಷವೆನಿಸಿದಾಗ ಮಾತ್ರ ಮುಖ್ಯವೆನಿಸುತ್ತದೆ.

ಕೆಲವೇ ನಿಮಿಷಗಳಲ್ಲಿ ಓದಿ ಮುಗಿಸಬಹುದಾದ ಈ ಕೃತಿಯನ್ನು ಅಧ್ಯಯನಮಾಡಿ ಆನಂದಿಸಿ, ನಿಮ್ಮ ಆಪ್ತರಿಗೂ ತಲುಪಿಸಿದಾಗ ಬರಹವು ಸಾರ್ಥಕ ಪಡೆಯುತ್ತದೆ. ಹಾಯ್ಕುಗಳನ್ನು ಓದುವುದು ಕಲೆ ಎನ್ನಬಹುದು. ೫+೭+೫ ಸೂತ್ರದಲ್ಲಿ ೧೭ ಅಕ್ಷರಗಳ ಮೂಲಕ ಬಂಧಿಸಲ್ಪಟ್ಟ ಅಕ್ಷರಗಳ ಗುಚ್ಛವಿದು. ಹಾಯ್ಕುಗಳಲ್ಲಿ ಸಹಜ ಅರ್ಥಗಳನ್ನು ಹುಡುಕಲೇ ಬಾರದು. ವಿಭಿನ್ನ ಅರ್ಥಗಳನ್ನು 'ಪದ' ಪ್ರಧಾನವಾಗಿ ಶಬ್ಧಸೂಚ್ಯವಾಗುತ್ತವೆ. ಇಪ್ಪತ್ತೆಂಟು ಅರ್ಥಗಳು ಕೆಲವೊಮ್ಮೆ ಆಯಾ ಪ್ರದೇಶ, ಬುದ್ಧಿಭಾವಗಳಿಗೆ ಅನುಗುಣವಾಗಿ ಹೆಚ್ಚಾಗುತ್ತಲೇ ಸಾಗುತ್ತದೆ. ಸಾಹಿತ್ಯ ಜ್ಞಾನ ಇಲ್ಲದಿದ್ದರೂ ಓದಿ ತನ್ನದಾಗಿಸಿಕೊಳ್ಳಬಹುದು ಸರಳ ಉಕ್ತಿಗಳು. ಈ ಸಾಹಿತ್ಯವನ್ನು ಓದುವ ಪ್ರತಿಯೊಬ್ಬರೂ ಇದೇ ರೀತಿಯಲ್ಲಿ ನಾನೂ

ಬರೆಯಬಲ್ಲೆ ಎಂದು ಪ್ರಯೋಗಿಸಬಹುದು. ಆದರೆ ಅರ್ಥವಿಕಾಸ ಹೆಚ್ಚು ಒತ್ತು ನೀಡಿ ಪದಗಳನ್ನು ಕೂಡಿಸಿ ಬರೆಯುವ ಒಂದು ರೀತಿಯ ಪದಬಂಧವಾಗಿಯೂ ಮೂಡುತ್ತದೆ. ಈ ಕೃತಿಯನ್ನು ಓದಿದ ನಿಮಗೆ ಮನಸ್ಸಿನ ಆನಂದದ ಜೊತೆಗೆ, ಬದುಕಿನ ದರ್ಶನವು ಸಹಜವಾಗಿಯೇ ದೊರಕುತ್ತದೆ ಎಂಬುದೇ ನನ್ನ ಆಶಯ. ತುಂಬಾ ಇಷ್ಟಪಟ್ಟು ಬರೆದ ಈ ಹಾಯ್ಕುಗಳಲ್ಲಿ ಒಲವಿಗೆ ಸಂಬಂಧಿಸಿದವುಗಳನ್ನು ಆಯ್ದು ಈ ಕಾಲದ ಒಲವಾಗಿ ಕಟ್ಟಿದ್ದೇನೆ. ಉಳಿದ ಬದುಕಿನ ಹಾಯ್ಕುಗಳು ಮೆಟ್ರೋ ಕಥನವೆಂಬ ಕಥಾ ಸಂಕಲನದೊಳಗೆ ಓದುವಿನ ವಿಭಿನ್ನ ಆಯಾಮಗಳಾಗಿ ಮೂಡಿಬರುತ್ತವೆ.

ಈ ಕೃತಿ ರಚನೆಗೊಳ್ಳಲು ನನ್ನ ಗುರುಗಳಾದ ಡಾ. ಸಿ.ಎ ರಮೇಶ್ ಅವರ ಸಂಶೋಧನ ಪ್ರಬಂಧ ಕೃತಿಯ ಪ್ರಕಟಣೆಯೇ ಮೂಲ ಕಾರಣವಾಯಿತು. ಇಂತಹ ಶ್ರೇಷ್ಠ ಸಂಶೋಧನ ಕಾರ್ಯವನ್ನು ಕನ್ನಡಕ್ಕೆ ನೀಡಿದ ನನ್ನ ಗುರುಗಳಿಗೆ ಧನ್ಯವಾದಗಳು. ಇಡೀ ಕೃತಿಯನ್ನು ಅಕ್ಷರ, ಪದಗಳ ಜೊತೆಗೆ ಭಾವ ವಿಹಾರದಲ್ಲಿ ಸರಿಪಡಿಸಿ, ಬೇಕು–ಬೇಡಗಳನ್ನು ಮುಕ್ತವಾಗಿ ನಿರ್ವಹಿಸಿದ ಸಖಿ ಕಾವ್ಯ ಅವರಿಗೆ ಕೃತಿಯ ಗೌರವ ಸಲ್ಲಲೇಬೇಕು. ನನ್ನ ಓದುಗರಾದ ಪ್ರೀತಿಯ ಎಲ್ಲಾ ಸಹೃದಯರಿಗೂ ಧನ್ಯವಾದಗಳು.

**– ಅಂಕುರ**

೦೧.೦೮.೨೦೨೪

## ಒಲವಿನ ನೂರು ಹಾಯ್ಕುಗಳು

ಅಪರೂಪದ
ಒಲವಿನ ಕೈಪಿಡಿ
ನಿನ್ನ ಸಾಂಗತ್ಯ

ಹಾಯ್ಕು ಪ್ರೇಮಕೆ
ಪುಟ್ಟ ವ್ಯಾಖ್ಯಾನ ಕೃತಿ
ಕ್ಷಣದ ಮಿಂಚು

ನಿನ್ನ ಮೌನವು
ನನ್ನ ಮಾತಲಿ ಸೇರಿ
ಅರ್ಥ ತುಂಬಿತು

ಬಾಳ್ವೆಯ ಗೀತೆ
ನೀ ಬರೆದ ಸಾಹಿತ್ಯ
ಓದೋಣ ಕೂಡಿ...

ನೋವೇ ಇಲ್ಲದ
ಸುಖವೆಂದರೆ ನಮ್ಮ
ಒಲವು ಮಾತ್ರ

ನನಗೆ ನೀನು
ನಿನಗೆ ನಾನು ಎಂದು
ಪ್ರೀತಿ ತುಂಬುವ

ಪ್ರೀತಿ ದ್ವೇಷದ
ಶತ್ರು, ನಲ್ಮೆಯ ನೆಲೆ
ಅನಂತ ಸುಖ

ಮಳೆಯೆಂದರೆ
ಅವಳ ಬೆಚ್ಚನೆಯ
ಬಿಸಿಯುಸಿರು

ಸೆಖೆ ಎಂದರೆ
ಇಬ್ಬರ ಬೆತ್ತಲೆಯ
ವಿರಹ ಸುಖ

ಚಳಿಯೆಂದರೆ
ಅಪ್ಪುಗೆಯ ಬಿಸಿಯು
ಮಾತಾಡುವುದು

ನಲ್ಲನಲ್ಲೆಯ
ಒಲವಿನ ಸುಖವು
ಪ್ರೇಮ ವ್ಯಾಖ್ಯಾನ

ಶಬ್ದ ನಿಶ್ಯಬ್ದ
ಒಲವಿನಲಿ ಶೂನ್ಯ
ಸುಂದರಾಕೃತಿ

ಪ್ರೇಮವೆಂದರೆ
ಉರಿಯುವ ಹಣತೆ
ತೈಲ ತತ್ತ್ವದಿ

ಮಧುರ ಕಾವ್ಯ
ನೀ ಪ್ರೇಮ ತಳಹದಿ
ಭಾವ ತುಂಬು ಬಾ

ನೀನು ನನ್ನವ
ಎಂಬ ಭಾವನೆಯಲಿ
ನಾನು ನಂಬಿದೆ

ಒಲವೆಂದರೆ
ನಂಬಿಕೆಯ ಪೂರ್ಣತೆ
ನಲ್ಮೆ ದೀಪ್ತಿಗೆ

ನಾನು ನೀನಾಗಿ
ನೀನು ನಾನಾಗಿ ಬಂದೆ
ಶರಣು ಎಂದೆ

ಅಮೃತವಿದು
ಒಲವಿನ ಸಾಂಗತ್ಯ
ನಮ್ಮೀ ಬಂಧನ

ನೋಟ ವಿಭಿನ್ನ
ಪಡೆದಂತೆ ಅರ್ಥವು
ಅಕ್ಷಿ ಚೆಲುವು

ಬದುಕಬೇಕು
ಒಲವಿನ ನೆಪದಿ
ನಲ್ಮೆಬಾಳ್ವೆಗೆ

ಚಂದ್ರನ ತಂಪೂ
ಸೂರ್ಯನ ಬಿಸಿಯೂ ಈ
ಪ್ರೇಮಕೆ ಇಲ್ಲ

ಎನ್ನ ಒಲವೆ
ನಿನ್ನ ಕ್ರಿಯಾಶೀಲತೆ
ಪುಟಿವ ಚೆಂಡು

ಶಾಂತಿಯ ಬೇರು
ಇಂದು ನೆನ್ನೆಯದಲ್ಲ
ಆದಿಮ ಬೀಜ

ಒಲವಾದರೆ
ನಿನ್ನ ಪ್ರತಿ ಹೆಜ್ಜೆಯೂ
ಮಧುರ ಕಾರ್ಯ

ಸೋಲಿಸ ಬೇಡ
ನಿನ್ನಯ ಗೆಲುವಿಗೆ
ಅದು ಚಿಕಿತ್ಸೆ

ತುಟಿ ಕಂಪಿಗೆ
ಅವಳು ನಾಚಿದಳು
ಚುಂಬನ ಸಾರ

ದಂತ ಕಾಂತಿಯು
ನಗುವಿನ ಚಿಗುರು
ದಾಳಿಂಬೆ ತೋಟ

ನೀ ಕಾಡಬೇಡ
ನೆನಪಿಗೆ ಸಾವಿಲ್ಲ
ನಿತ್ಯ ಉಸಿರು

ನಿನಗೆ ನಾನು
ನೀಡುವ ಪ್ರೇಮ ಕಾಣ್ಕೆ
ಜೀವನ ಪ್ರೀತಿ

ಇಷ್ಟ ಕೃತಿಯು
ಒಳ್ಳೆಯ ಮಿತ್ರನಾಗಿ
ಸದಾ ಇರುವ

ಮನದ ಮಾತು
ಮೌನವಾದರೆ ಪ್ರೇಮ
ಈಗ ಪ್ರಾರಂಭ

ನೀ ನನ್ನೊಳಗೆ
ನಾ ನಿನ್ನೊಳಗೆ ಜೀವ
ಉಸಿರಾಡುವ

ಪ್ರೇಮ ರೋಗಕೆ
ಒಲವಿನ ಸವಿಯು
ಮೊದಲ ಮದ್ದು

ಇವಳ ಹಸಿ
ವ್ಯಾಖ್ಯಾನದಲಿ ನಾನು
ಬಿಸಿ ಉತ್ತರ

ಸದಾ ಹಂಬಲ
ಒಲವಿನ ಕಾಣಿಕೆ
ಮುಗ್ಧ ಪ್ರೇಮದಿ

ಚಿರ ನಂಬಿಕೆ
ಒಲುಮೆಯ ಪ್ರತಿಜ್ಞೆ
ನೆಮ್ಮದಿಗಾಗಿ

ಭೋಗ ಸಂಭೋಗ
ಆನಂದವೆ ಹೊರೆತು
ಅನಂತವಲ್ಲ

ಪ್ರತಿ ಒಲವು
ಅವರವರ ಆಯ್ಕೆ
ಮನಕ್ಕೈಪಿಡಿ

ನಾನು ನೀನಲ್ಲ
ನೀನೆ ನಾನಾದೆ ಸಖಿ
ಇದೇ ಪ್ರೇಮವು

ಕಾವ್ಯ ಕಾರಣ
ಪ್ರೇಮ ಬುತ್ತಿಯೊಳಗೆ
ಸದಾ ಅಸ್ಮಿತೆ

ನೋವು ಇಲ್ಲದ
ಬದುಕಿನ ನಾವೆಯು
ಒಲವು ಮಾತ್ರ

ಒಲವಿಲ್ಲದ
ಪ್ರೇಮ, ಸಂಸಾರಗಳು
ಲಾಭ ಕೂಟವು

ತಂಗಾಳಿಯಲ್ಲಿ
ನಿನ್ನ ನೆನಪು ಕೂಡ
ಪ್ರೀತಿಯ ಕಾರ್ಯ

ಆಸೆ ಎಂದರೆ
ಬರಿಯ ಮೋಹವಲ್ಲ
ಮನಸ್ಸಿಚ್ಚೆಯು

ಪ್ರತಿ ದುಃಖಕ್ಕೂ
ಮುಲಾಮು ಹಚ್ಚುವ ನೀ
ಒಲವೆ ಸರಿ

ಮಳೆ ಸುರಿದ
ಮೋಡದಂತೆ ನಿರ್ಮಲ
ನನ್ನ ಒಲವು

ಖಾಲಿ ಪುಟವು
ಹಲವು ಯೋಚನೆಯ
ಸ್ವಚ್ಛಂದ ಪ್ರೀತಿ

ಒಲವಿರುವ
ಪ್ರೀತಿಯೇ ಬಣ್ಣ ಬಣ್ಣ
ಕಾಮನಬಿಲ್ಲು

ಹಬೆಯಾಡುವ
ಮಳೆಯ ಹನಿಯಂತೆ
ನಿನ್ನ ಅಪ್ಪುಗೆ

ನೀನು ಚಂದಿರ
ತಂಪಾದ ಕೊಳದಲ್ಲಿ
ನನ್ನ ಪ್ರೇಮಿಸು

ಚಳಿಯ ಬಿಸಿ
ನಿನ್ನ ಅಪ್ಪುಗೆಯಲ್ಲಿ
ದೀರ್ಘ ಚುಂಬನ

ಪ್ರೇಮ ಕಾಣಿಕೆ
ನಿನ್ನ ಮೊದಲ ಮುತ್ತು
ಸಿಹಿ ಚುಂಬನ

ಒಲವೆಂದರೆ
ನನ್ನ ನಿನ್ನ ಶುದ್ಧಾತ್ಮ
ಮನದ ಪೂಜೆ

ನನ್ನ ಪ್ರೀತಿಯ
ಸಖಿಯೇ, ನಂಬಿದರೆ
ಬಾಳು ಸುಖಿಯೆ.

ನೀನು ಲೇಖನಿ
ನಾ ಅದರ ಮಸಿಯು
ಕಂದನೆ ಕರ್ತೃ

ಹಿತ್ತಲ ಹೂ ನೀ
ನನ್ನ ಹತ್ತಿರದಲ್ಲೇ
ಸದಾ ಇರುವೆ

ಶರಣೆ ನೀನು
ಕಾಯಕದಿ ಪಡೆದ
ಶರಣ ನಾನು

ಎಲೆ ಹಸಿರೆ
ಕಾಪಿಡು ಹಣ್ಣಿನಂತೆ
ಬೀಜ ಆಗುವೆ

ಸುಗಂಧ ಹೂವೆ
ಪರಿಮಳ ಹರಡು
ಒಲವಿನಿಂದ

ನಾ ನೋವಿನಲ್ಲೂ
ನಂಬುವ ಸಮಾಧಾನ
ಒಲವು ಮಾತ್ರ

ಹೆದ್ದಾರಿಯಂತೆ
ಒಲವಿನ ಚರಿತ
ಸುದೀರ್ಘ ಯಾನ

ಪ್ರಿಯ ಸಖಿಯೇ,
ನಿನ್ನೆಸರೇ ಬರೆವೆ
ಪತ್ರದ ಪೂರ್ಣ

ಹೊಂಗೆಯ ತಂಪು
ನಿನ್ನ ಪ್ರೇಮದ ಇಂಪು
ಸುಖದ ನಿದ್ರೆ

ಚಿಕ್ಕ ಕಾರ್ಯವೂ
ನಿನ್ನ ಪ್ರೇಮದ ಶಕ್ತಿ
ನಾನು ನಿಮಿತ್ತ

ಅಗಣಿತದಿ
ನನ್ನ ನಿರ್ದಿಷ್ಟ ಆಯ್ಕೆ
ನಿನ್ನ ಒಲವು

ಚೆಲುವು ನೋಟ
ಪ್ರೇಮ ತುಂಬಿ ಬರಲು
ಅದುವೆ ಪುಣ್ಯ

ಹಣದ ಮೇಲೆ
ಹೃದಯವಿಟ್ಟಿದ್ದೇನೆ,
ಆಯ್ಕೆ ನಿನ್ನದು.

ಚೆಲುವೆಂದರೆ
ನೀನು ಇರುವಂತೆಯೆ
ನಾನಿರುವುದು

ಯುದ್ಧ ನಿಲ್ಲಲು
ಪ್ರೀತಿಯು ಚಿಗುರಲಿ
ಎಲ್ಲರಲ್ಲಿಯೂ

ಮೊದಲ ನೋಟ
ಯೌವನದ ಒಲವು
ಪ್ರೇಮ ವ್ಯಾಖ್ಯಾನ

ಬೆಚ್ಚಗಿರಲಿ
ಒಲವಿನ ಕಥೆಯು
ಸ್ವಚ್ಛ ಮನದಿ

ಒಮ್ಮೆ ಪ್ರೀತಿಸು
ವಿರಹಿಗಳ ಕಥೆಯು
ನಿತ್ಯ ದರ್ಶನ

ಚಿರ ನಂಬಿಕೆ
ಒಲುಮೆಯ ಪ್ರತಿಜ್ಞೆ
ನೆಮ್ಮದಿಗಾಗಿ

ಮೈತ್ರಿಕೂಟವು
ನನ್ನ ನಿನ್ನ ಒಲವು
ಸಹಿಸೋಣ ಬಾ

ಒಲವು ಸುಖ
ನೀ ನಂಬಿದರೆ, ಇಲ್ಲ
ಬರಿ ನರಕ

ಮುತ್ತಿಡು ಬಾ ನೀ
ಅಧರ ಸ್ಪರ್ಶವೇಕೆ
ಸ್ವರ್ಗ ನಾಚಲಿ

ಕಾರಣವಿಲ್ಲ
ಒಲವು ಸಹಜವು
ಪ್ರಕೃತಿಯಂತೆ

ಕಣ್ಣಿನಲ್ಲಿಯೇ
ಸಹಿಸಿದಳು ಎನ್ನ
ಪ್ರೇಮ ಪತ್ರಕೆ

ಮನಸು ಕೂಡಿ
ಮಾಡುವ ಒಪ್ಪಂದವೆ
ಒಲವು ರೂಪ

ಹೇಳುವ ಮುನ್ನ
ಆಲೋಚಿಸು, ಒಲವು
ಶಾಶ್ವತ ನಂಟು.

ತಿಳಿ ಸಂಗೀತ
ಒಲವಿನ ನಾದವು
ಅನಂತ ಸಾವು

ಬರಿ ನಾಟಕ
ಪ್ರೇಮವಿಲ್ಲದ ಕೂಟ
ಕಾಲಹರಣ

ಸಾಕಿಷ್ಟು ನೋಟ
ನನ್ನ ಭರವಸೆಗೆ
ಒಲವಿನಿಂದ

ವಿಹರಿಸು ಬಾ
ಒಲವಿನ ಕಾಲದಿ
ವಿರಹವೇಕೆ?

ಒಲವು ಇರೆ
ಬಡತನ, ಹಸಿವು
ನೆಮ್ಮದಿ ಬಾಳ್ವೆ

ನೀನು ಬರೆದ
ಪ್ರತಿ ಪತ್ರವೂ ನನ್ನ
ಭವಿಷ್ಯ ಪಾಠ

ಭ್ರಮೆಯೊಳಗೆ
ಒಲವಿರದು ಅದು
ಸಪ್ತ ಸಾಗರ

ಪ್ರೇಮ ಚಿಕಿತ್ಸೆ
ಎಲ್ಲರಿಗೂ ಸಿಗಲಿ
ಒಮ್ಮೆ ಬಾಳಲಿ

ಎಳೆ ಬಾಳೆಯ
ಮೃದು ಸೋಂಕಲಿ ಕೇಳು
ಒಲವು ಮಗು

ಮೋಡದ ಹಾಗೆ
ಮುನಿದಷ್ಟೂ ಮಳೆಯು
ಪ್ರೇಮ ಬೆಳೆಯು

ಕಪ್ಪು ಮೋಡದ
ಕಥೆಗೆ ನಾನೇ ಸಖ,
ನೀನೆ ಸಖಿಯು.

ಎಳೆ ಪೈರಿನ
ಕನಸಂತೆ ಒಲವು
ನಿನ್ನ ಚೆಲುವು

ಜಡಿ ಮಳೆಯು
ಭೂಮಿಗೆ ಹದ, ನಿನ್ನ
ಒಲವಿನಂತೆ.

ಹಸಿವು ಬೇಕು
ಹಿತವಾದ ಕಾರ್ಯಕ್ಕೆ
ಒಲವಿನಂತೆ

ಕಣ್ಣಿನ ಭಾಷೆ
ಪ್ರೇಮದಲಿ ಸಾಮಾನ್ಯ
ಅರ್ಥ ವಿಶೇಷ.

ಹಕ್ಕಿಯ ನೋಟ
ಒಲವಿನಂತೆ ಸೂಕ್ಷ್ಮ
ಅರ್ಥ ಗಹನ

ಒಲವಿರುವ
ಈ ನಿಸ್ವಾರ್ಥ ಬದುಕೆ
ಜೀವಂತ ಕಾವ್ಯ

ಬದುಕೆಂದರೆ
ಈ ಒಲವು ಬರೆದ
ಸಹಜ ಶಾಲೆ

ಒಲವಿರದ
ಯಾವುದೇ ಕೆಲಸವು
ಶುದ್ಧ ಗಣಿತ

ಒಲವಿನಲಿ
ಮಾಡುವ ಪ್ರತಿ ಕಾರ್ಯ
ಶುದ್ಧ ಸಾಹಿತ್ಯ

***

**ಸಾಹಿತ್ಯ ರಚನೆ**

1. ಜೀವನ ಚರಿತ್ರೆ – ಖಾನ್ ಅಬ್ದುಲ್ ಗಫಾರ್ ಖಾನ್ – 2015
2. ಕವನ ಸಂಕಲನ – ಎತ್ತಿಕೊಂಡವರ ಕೂಸು – 2017
3. ಕವನ ಸಂಕಲನ – ಸಖಿ ಶಾರದೆ – 2022
4. ಕವನ ಸಂಕಲನ – ನಲ್ಲ ನಲ್ಲೆಯ ವಸಂತ – 2022
5. ಸಂಶೋಧನಾ ಕೃತಿ – ಸವೆಯದೀ ಸವಿ – 2022
6. ಸಂಶೋಧನಾ ಕೃತಿ – ಸೌಂದರ್ಯ ಶುಚಿ – 2022
7. ಸಂಶೋಧನಾ ಕೃತಿ – ಸಹೃದಯ ಓದು – 2022
8. ಕವನ ಸಂಕಲನ – ಸುಂದರ ಕಿಚ್ಚು – 2023
9. ಈ ಕಾಲದ ಒಲವು (ನೂರು ಹಾಯ್ಕುಗಳು) – 2024

**ಪ್ರಕಟಣೆಗೆ ಸಿದ್ಧವಾಗಿರುವ ಕೃತಿಗಳು :**

10. ವಿಮರ್ಶೆ – ರಸ ಚಿಂತನೆ(ಮರ ಬರೆದ ರಂಗೋಲಿ ಕೃತಿ ವಿಮರ್ಶೆ)
11. ಮೆಟ್ರೋ ಕಥನ (ಐನೂರು ಕಥೆಗಳ ಜೊತೆಗೆ ನೂರು ಹಾಯ್ಕುಗಳ ವಿಶೇಷ ಸಂಗಮ)
12. ಸಂಶೋಧನಾ ಕೃತಿ – ತೇದಷ್ಟೂ ಗಂಧ
13. ಸಂಶೋಧನಾ ಕೃತಿ – ಬೆಳಕಿನ ಗಂಧ
14. ಕವನ ಸಂಕಲನ – ಬಂದೂಕಿನ ವಿರುದ್ಧ ಪದ

ಜೀವನ ಪ್ರೀತಿ ಜಾಲತಾಣ : https://sites.google.com/view/jeevana-prithi/




**ಒಲವಿರುವ**
**ಈ ನಿಸ್ವಾರ್ಥ ಬದುಕೇ**
**ಜೀವಂತ ಕಾವ್ಯ**

ಮನಸ್ಸಿಗೆ ಒಲವಿನ ಚಿಕಿತ್ಸೆ ನೀಡಲು ಈ ಕೃತಿಯು ನಿಮ್ಮ ಮುಂದಿದೆ. ನೋವುಗಳು ಎಲ್ಲರಿಗೂ ವಿಭಿನ್ನವಾದ ಅನುಭವಗಳಾಗಿರುತ್ತವೆ. ಆ ಅನುಭವಗಳನ್ನು ಹದಗೊಳಿಸಿ, ಸಾಂತ್ವನಗೊಳ್ಳಲು ನಮ್ಮೊಳಗಿನ ಹಿತವಾದ ನಂಬಿಕೆಗೆ ಒಲವು ತುಂಬಬೇಕು.
ವಿಶ್ವಸಾಹಿತ್ಯದಲ್ಲಿ ಹಾಯ್ಕುಗಳು ಪ್ರೇಮ ಬರಹಗಳಿಗಾಗಿಯೇ ಸೃಷ್ಟಿಯಾದ ಪ್ರಕಾರದಂತೆ ಕಾಣುತ್ತದೆ. ಕನ್ನಡದಲ್ಲಿಯೂ ಸಾವಿರಾರು ಹಾಯ್ಕುಗಳು ಸೃಷ್ಟಿಯಾಗಿವೆ. ಈ ಕಾಲದ ಒಲವು ಇದೇ ಸಾಲಿಗೆ ಸೇರುತ್ತಿದ್ದರೂ ನಿಮ್ಮ ಓದುವಿನ ಸಹೃದಯಕ್ಕೆ ವಿಶೇಷವೆನಿಸಿದಾಗ ಮಾತ್ರ ಮುಖ್ಯವೆನಿಸುತ್ತದೆ.
ಕೆಲವೇ ನಿಮಿಷಗಳಲ್ಲಿ ಓದಿ ಮುಗಿಸಬಹುದಾದ ಈ ಕೃತಿಯನ್ನು ಅಧ್ಯಯನಮಾಡಿ ಆನಂದಿಸಿ, ನಿಮ್ಮ ಆಪ್ತರಿಗೂ ತಲುಪಿಸಿದಾಗ ಬರಹವು ಸಾರ್ಥಕ ಪಡೆಯುತ್ತದೆ.

- ಅಂಕುರ


ISBN 978-93-340-9570-8
9 789334 095708 >